

# ಹೋಲೆ... ಹೋಲೆ ಬೆಳ್ಳಕ್ಕಿಮಾಲೆ

ಶಾ. ಬಾಲುರಾವ್

# ಹೋಲೆ... ಹೋಲೆ
# ಬೆಳ್ಳಕ್ಕಿಮಾಲೆ

ಐವತ್ತನಾಲ್ಕು ಕಿರುಗವಿತೆಗಳು

ಶಾ. ಬಾಲುರಾವ್




ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ, ಕರ್ನಾಟಕ

*Hole... Hole... Bellakki Male* (Fiftyfour short poems in Kannada) by S. Balu Rao, Kaveri, 131, J-Extension, Lakshmi Nagar, Delhi 110 092 and published by Akshara Prakashana, Heggodu, Sagara, Karnataka 577 417. First Edition: 1999.

*Front Cover* by Ranjan (Sengupta), New Delhi

ಮೊದಲ ಮುದ್ರಣ: ೧೯೯೯.



ಅಕ್ಷರ ಜೋಡಣೆ: ಅಕ್ಷರ ಗಣಕ, ಹೆಗ್ಗೋಡು.
ಮುದ್ರಣ: ಅನನ್ಯ ಪಬ್ಲಿಕೇಷನ್ಸ್, ಪ್ರೈ. ಲಿ.
ಬೆಂಗಳೂರು 560 004

ಬೆಲೆ : ಐವತ್ತು ರೂಪಾಯಿಗಳು

ಕೈಹಿಡಿದ

**ಕಮಲಳಿಗೆ**

ದಾಂಪತ್ಯದ ನಲವತ್ತನೆ ವರ್ಷದ

ಗುರುತಾಗಿ

"ಹೋಲೆ... ಹೋಲೆ
ನೋಡೆಲೆ ಬಾಲೆ
ನೆತ್ತಿಯ ಮೇಲೆ
ಬೆಳ್ಳಕ್ಕಿ ಮಾಲೆ."

**ಈ ಲೇಖಕರ ಇತರ ಕಾವ್ಯಕೃತಿಗಳು:**

ಸೂರ್ಯ ಇವನೊಬ್ಬನೇ
ನಡೆದದ್ದೇ ದಾರಿ

**ಅನುವಾದಗಳು:**

ಸುಭಾಷ್ ಮುಖ್ಯೋಪಾಧ್ಯಾಯರ ಕವಿತೆಗಳು
ಆನಾ ಆಹ್ಮತೋವಾಳ 'ರಿಕ್ವಿಯಂ' ಮತ್ತಿತರ ಕವಿತೆಗಳು
ಬೆಟೋಲ್ಟ್ ಬ್ರೆಷ್ಟ್‌ನ ಕವಿತೆಗಳು
'ಉಮರ ಸಂದೇಶ' – ಉಮರ್ ಖಯ್ಯಾಮನ ರುಬಾಯಿಗಳು

# ಮುಮ್ಮಾತು

ಈ ವರ್ಷ ಜುಲೈ ತಿಂಗಳಲ್ಲಿ ಪ್ರಕಟವಾದ ನನ್ನ 'ನಡೆದದ್ದೇ ದಾರಿ' ಕವಿತಾ ಸಂಗ್ರಹದಲ್ಲಿ ಹೇಳಿದ್ದೆ – ಇದುವರೆಗೂ ನಾನು ಬರೆದಿಟ್ಟಿರುವ ನೂರಕ್ಕೂ ಹೆಚ್ಚು ಕವಿತೆಗಳಲ್ಲಿ ನಲವತ್ತೆಂಟು ದೊಡ್ಡವನ್ನು ಅದರಲ್ಲಿ ಪ್ರಕಟಿಸಿ, ಉಳಿದ ಸುಮಾರು ಐವತ್ತು ಚಿಕ್ಕವನ್ನು ಇನ್ನೊಂದು ಸಂಕಲನಕ್ಕೆ ತೆಗೆದಿಟ್ಟಿರುವುದಾಗಿ. ಆ ಚಿಕ್ಕ ಕವಿತೆಗಳ ಸಂಗ್ರಹವೇ ಈ 'ಹೋಲೆ... ಹೋಲೆ... ಬೆಳ್ಳಕ್ಕಿ ಮಾಲೆ'.

'ಹೋಲೆ... ಹೋಲೆ' ಪಂಜಾಬಿ ಭಾಷೆಯ ಶಬ್ದ, ಕುಣಿತದ ಹಾಡುಗಳಲ್ಲಿ ಬರುವಂತಹದು. ಅದು ಅರ್ಥರಹಿತವಾದರೂ ಸುಂದರ ಭಾವವ್ಯಂಜಕ ಶಬ್ದ. ಹರ್ಷ ಸಂತೋಷಗಳನ್ನು ಸೂಚಿಸಲು ಮಾಡಿಟ್ಟಂತಿರುವುದು. ಯಾವ ಭಾಷೆಗೂ ಒಗ್ಗುವಂತಹದು. ಅದನ್ನು ಈ ಸಂಗ್ರಹಕ್ಕೆ ಬಳಸಿಕೊಂಡ ಕಾರಣ ಸುಸ್ಪಷ್ಟ.

ಇಲ್ಲಿನ ಕವಿತೆಗಳ ಧಾಟಿ ೧೯೮೦ರಲ್ಲಿ ಪ್ರಕಟವಾದ ನನ್ನ 'ಸೂರ್ಯ ಇವನೊಬ್ಬನೇ'ಯ ತರಹದ್ದು. ಎರಡರಲ್ಲಿಯ ಮನೋಧರ್ಮ, ಕಲ್ಪನಾವಿಲಾಸ ಒಂದೇ ಬಗೆಯದು. ಥಳ್ಳನೆ ಮಿಂಚಿ ಬೆರಗುಗೊಳಿಸಿ, ಕ್ಷಣದ ಖುಷಿಕೊಟ್ಟು ಮನಸ್ಸಿನಲ್ಲಿ ನೆಲಸುವಂತಹದು. ಒಂದೊಂದು ಕವಿತೆಯೂ ಸ್ವಯಂಪೂರ್ಣ. ಆದರೆ ಒಂದೇ ವ್ಯತ್ಯಾಸ: ಅದು ಏಕ ವಿಷಯಕ, ಇದು ಬಹು ವಿಷಯಕ. ದಿನವೂ ನನ್ನನ್ನು ಕಾಡುವ ಕಾಲಧರ್ಮ, ನನ್ನ ಬದುಕಿಗೆ ಬಂದ ಮಾತು, ಕವಿತೆ; ನನ್ನ ಸುತ್ತಣ ಸೂರ್ಯ-ಚಂದ್ರ, ನೆಲ-ನೀರು, ಮಳೆ-ಹೊಳೆ, ಮರ-ಗುಡ್ಡ-ಬೆಟ್ಟ ಮತ್ತು ಜತೆಯ ಮನುಷ್ಯರು – ಮುಂತಾದವನ್ನು ಕುರಿತದ್ದು (ಎರಡು ಕವಿತೆಗಳು, ೯ ಮತ್ತು ೧೦, 'ಸೂರ್ಯ ಇವನೊಬ್ಬನೇ'ಯ ಮುಂದುವರಿಕೆ). ಎಂತಲೇ ಇಲ್ಲಿನ ಕವಿತಾಪ್ರಪಂಚದ ವ್ಯಾಪ್ತಿ ದೊಡ್ಡದು.

ಈ ಸಂಗ್ರಹದ ಹಲವಾರು ಕವಿತೆಗಳು ಗುಚ್ಛಗುಚ್ಛಗಳಲ್ಲಿದ್ದು, ಒಂದೊಂದು ಗುಚ್ಛವೂ ಒಂದೇ ವಿಷಯವನ್ನು ಕುರಿತದ್ದಾದರೂ ಅವುಗಳಲ್ಲಿ ಪರಸ್ಪರ ಸಂಬಂಧವಿಲ್ಲ. ಬದಲು, ಅವುಗಳ ಆಶಯದಲ್ಲಿ ವಿರೋಧವೂ ಇರಬಹುದು. ಆದ್ದರಿಂದ ಇಲ್ಲಿನ ಕವಿತೆಗಳನ್ನು ಕ್ರಮವಾಗಿ ಓದುವುದರ ಬದಲು, ಅಲ್ಲೊಂದು ಇಲ್ಲೊಂದರಂತೆ ಓದಿದರೆ ಹೆಚ್ಚು ಸೊಗಸೀತು.

ಮಿತ್ರ ಶ್ರೀ ಕೆ.ವಿ. ಸುಬ್ಬಣ್ಣ ಹಾಗೂ ಚಿ. ಅಕ್ಷರ ಅವರ ವಿಶ್ವಾಸದ ಫಲ ಈ ಪ್ರಕಟಣೆ. ಅವರ ಸಾಹಿತ್ಯ, ಸಂಸ್ಕೃತಿಗಳ ಕಡೆಗಿನ ಒಲವು ನನ್ನಂಥ ಅನೇಕರ ಉತ್ಸಾಹಕ್ಕೆ ಕಾರಣ ಎಂದು ಅವರನ್ನು ಬಲ್ಲವರೆಲ್ಲರೂ ಬಲ್ಲರು. ಅವರ ಬಗೆಗಿನ ನನಗಿರುವ ಭಾವನೆಯನ್ನು ವ್ಯಕ್ತಪಡಿಸಲು ಬೇರೆ ಶಬ್ದ ಹೊಳೆಯದ ಕಾರಣ, ಅವರಿಗೆ 'ವಂದನೆ' ಎಂದಷ್ಟೇ ಹೇಳುತ್ತೇನೆ.

ಸೆಪ್ಟೆಂಬರ್, ೧೯೯೮ **ಶಾ. ಬಾಲುರಾವ್**
ಹೊಸ ದಿಲ್ಲಿ

# ಒಳಹುರುಳು

# ಕವಿತೆ

ಎಲ್ಲಿ ? ಎಲ್ಲಿ ? – ಎಂದು ತಿಣಕಹೊರಟಾಗ
ಸಿಕ್ಕಿದ್ದು ಬರಿಯ ಕಸ, ಕೊಳೆ.
ತಾನೇತಾನಾಗಿ ಒಲಿದು ಬಂದಾಗ
ಇದೊಂದು ಹುಚ್ಚು ಹೊಳೆ.

# ಕವಿ ಮತ್ತು ಕವಿತೆ

ಏನೇನೋ ಮಾಡಬಯಸಿದ್ದಕ್ಕೆ
ಏನೂ ಮಾಡದ್ದಕ್ಕೆ
ಏನೂ ಮಾಡಲಾಗದ್ದಕ್ಕೆ
ಮಾಡಹೊರಟಾಗಿನ ಉತ್ಸಾಹವನ್ನು
ಉತ್ಸವಿಸಿ,
ಮಾಡಲಾಗದ ದುಃಖಕ್ಕೆ
ವ್ಯಥಿಸಿ
ನೀನು ಮಾಡಬಹುದಾದದ್ದಿಷ್ಟೇ
ಎಂದು ಅಣಕಿಸುವಂತೆ
        ಹುಟ್ಟಿತ್ತೊಂದು
        ಕವಿತೆ.

## ಮಾತು – ಕವಿತೆ

"ನನ್ನ ಮೊಮ್ಮಗ ಮುಕುಂದ
ನನ್ನಂತಿದ್ದಾನೆ ಕಣೋ"
ಎಂದು ನೀನಂದದ್ದು
        ಉಕ್ತಿ, ಮಾತು.

"ಹೌದೋ, ನೀನು ತದ್ವತ್
ನಿನ್ನ ಮೊಮ್ಮಗನಂತಿದ್ದಿ!"
ಎಂದು ತಿರುಚಿ ಹೇಳಿದ್ದು
ವಕ್ರೋಕ್ತಿ, ಕವಿತೆ.

---

ಇದು ೨೮.೨.೯೫ರಂದು ಗೆಳೆಯ ಯು. ಆರ್. ಅನಂತಮೂರ್ತಿಯೊಂದಿಗೆ ಮಾತಾಡುತ್ತಿದ್ದಾಗ ಹಾರಿದ ಕಿಡಿ.

# ಒಬ್ಬ ಸೂಫಿ ಹೇಳಿದ್ದು

‘ಆಡು –
ಆಡಿದ್ದು
ಮೌನಕ್ಕಿಂತ
ಹೆಚ್ಚು ಸೊಗಸು
ಎಂದು ಅನಿಸಿದಾಗಷ್ಟೇ.’

## ಮಾತಿನ ಮೂರು ಮುಖಗಳು

ಆಡಿದ್ದು
ಗಾಳಿಗೆ;

ಬರೆದದ್ದು
ಧೂಳಿಗೆ;

ಬರೆಯದೇ ಬಿಟ್ಟದ್ದು
ಹಾಳಿಗೆ.

# ಕಾಲ ಮತ್ತು ಲೇಖಕ

ಕಣ್ಣೀರ ನದಿ ಇದು
ಕಾಲ.
ದಾಟಹೊರಟಿದ್ದೇವೆ ನಾವು
ಹಟಮಾರಿ ಲೇಖಕರು –
ಬಿಳಿಯ ಕಾಗದದ
ಶಬ್ದ ದೋಣಿಗಳ ಮೇಲೆ.

# ಕೆಲವೊಬ್ಬರ ಮಾತು

ಚೇಳು
ಚೇಳಿಗೊಂದು ಬಾಲ
ಬಾಲದ ತುದಿಗೆ ಕೊಂಡಿ
ಕೊಂಡಿಯಲ್ಲಿ ಮುಳ್ಳು
ಮುಳ್ಳಿನ ತುಂಬ ವಿಷ –
        ಫಟ್ಟನೆ ಬಡಿಯುವ
        ಕೆಲವೊಬ್ಬರ ಮಾತು!

# ಬೆಳಕು

ಮೊಮ್ಮಗ ಕೇಳಿದ –
"ಬೆಳಕೆಂದರೇನಜ್ಜ?"

ಅಜ್ಜ ಹೇಳಿದ –
"ಕತ್ತಲಲ್ಲಿ
ಹತ್ತು ಹೆಜ್ಜೆ ಹಾಕಿ ನೋಡು, ಮಗು.
ನಿನಗೇ ತಿಳಿಯುತ್ತದೆ."

# ಸೂರ್ಯಸ್ನಾನ

(‘ಸೂರ್ಯ ಇವನೊಬ್ಬನೇ’: ೪೯)

ಇಡಿ ರಾತ್ರಿ
ಲಕ್ಷೋಪಲಕ್ಷ
ನಿಯಾನ್ ದೀಪಗಳ
ಹೊಂಡದ ಹೊಲಸಿನಲ್ಲಿ
ಹೊರಳಾಡಿ ಏಳುವ
ಈ ಎಮ್ಮೆ ಜೀವಕ್ಕೆ

ಬೆಳಗಾಗ
ಹಸಿರೆಲೆಯ ಸಂದಿಂದ
ಧುಮ್ಮಿಕ್ಕುವ
ಬೆಳಕಿನಬ್ಬಿಯ
ಕ್ಷಣದ್ಯುತಿಯಲ್ಲಿ
ಶೌಚಸ್ನಾನ –
        ದಿನದಿನದ
        ಪಾಪನಾಶನ.

## ಸಂಜೆಯ ಸೂರ್ಯ

('ಸೂರ್ಯ ಇವನೊಬ್ಬನೇ': ೫೦)

ಸಂಜೆ
ಪಶ್ಚಿಮ ರಣಾಂಗಣದಲ್ಲಿ
ಉರುಳಿ ಬಿದ್ದೊಂದು ತಲೆ –
ರಾಶಿ ರಾಶಿ ಹೆಪ್ಪುಗಟ್ಟಿದ ರಕ್ತ.
ಇಡೀ ರಾತ್ರಿ
ಕತ್ತಲ
ಮೂಕ ಆಕ್ರಂದನ.

# ಬುದ್ಧಪೂರ್ಣಿಮೆ

ವೈಶಾಖ ಶುಕ್ಲ ಪೂರ್ಣಿಮೆಯ ರಾತ್ರಿ
ಮನೆಯಂಗಳದಲ್ಲಿ ಎಲ್ಲೆಲ್ಲೂ
ವಸಂತದ
ಕಿಲಕಿಲ ಗಂಧ.

ಕತ್ತೆತ್ತಿ ನೋಡಿದರೆ
ಮೇಲೆ
ತುಂಬು ಚಂದಿರನ ಮುಖದಲ್ಲಿ
ಬುದ್ಧನ ಬೆಳ್ಳಿನಗೆ.

# ನನ್ನ ಚಂದ್ರಿ

ನಿನ್ನೆ ಅಮಾವಾಸ್ಯೆಯಂದು
ಮುನಿಸಿಕೊಂಡು ತವರಿಗೋಡಿದಳಿವಳು.

ಹೋದರೆ ಹೋದಳು ಎಂದು
ಎರಡು ದಿನ ನಾನೂ ಬಿಗುಮಾನದಲ್ಲಿದ್ದೆ.

ಆದರೆ ಇವತ್ತಾಗಲೇ
ಇದ್ದಿದ್ದರಾಗಿತ್ತಲ್ಲ ಎಂಬ ತುಡಿತ.

ಅವಳಿಗೂ ಒಬ್ಬಂಟಿತನದ ಚಳಿ ತಟ್ಟಿರಬೇಕು.
ಕರಸಿಕೊಳ್ಳದೆ ಬಂದು ಹಣಕಿಹಾಕಿದ್ದಾಳೆ
ಬಿದಿಗೆಯ ಬೆಳಕಂಡಿಯಿಂದ.

# ಊರವರೆಲ್ಲರ ಚಂದ್ರಿ

ಒಮ್ಮೆಲೇ
ಹಲವರ ಹಂಚಿಕೊಂಡವಳಿವಳು,
ಕೋಟಿಕೋಟಿ ಜನರ
ಮೆಚ್ಚಿಗೆಯ ಹೆಣ್ಣು – 'ಚಂದ್ರಿ'.
ಆದರೂ ಅವರ ನಡುವೆ
ಅಸೂಯೆಯಿಲ್ಲ,
ಅವರ ಹೆಂಡಿರೆದೆಯಲ್ಲಿ
ಸವತಿಮತ್ಸರವಿಲ್ಲ.

## ಎಂಥ ಹೆಸರು ಇವಳಿಗೆ!

'ಚಂದ್ರಿ' –
ಕುಲಸ್ತ್ರೀಯರಿಗೆ ಅದೇಕೋ ವರ್ಜ್ಯ
ಈ ಮುದ್ದು ಹೆಸರು.
ಆದರೆ ಊರ ಸೂಳೆಯರಿಗೆ
ಅಚ್ಚುಮೆಚ್ಚು.
ಅದನ್ನು ತಮ್ಮದಾಗಿಸಿಕೊಂಡು
ಮೆರೆದಿದ್ದಾರೆ ಅವರು.

# ಕಾವಲು

ಪೃಥ್ವಿ ಸುತ್ತುತ್ತಿದೆ.
ಕತ್ತಲಲ್ಲಿ ಅದು ದಾರಿ ತಪ್ಪದಂತೆ
ಕಣ್ಣಲ್ಲಿ ಕಣ್ಣಿಟ್ಟು
ಕಾವಲು ಕಾದಿವೆ
        ಇರುಳ ನಕ್ಷತ್ರಗಳು.

# ಫ್ಯೂಜಿಯಾಮಾ

ನವೆಂಬರ್ ತಿಂಗಳ ಹಿಮರಾತ್ರಿ.
ಬೆಳುದಿಂಗಳಲ್ಲಿ
ಬೆಳ್ಳನೆ ಬೆಳಗುವ
ಫ್ಯೂಜಿ ಬೆಟ್ಟ –
        ಯಾರೋ ಮೇಲಿಂದ
        ಆಕಾಶದ ಒಂದರಿಯಲ್ಲಿ
        ಜರಡಿ ಹಿಡಿದು
        ಗಗನದೆತ್ತರ
        ಅಕ್ಕಿಹಿಟ್ಟಿನ ಗುಡ್ಡೆ ಹಾಕಿದ್ದಾರೆ.

ಟೋಕಿಯೋ – ಕಿಯೋಟೋ ದಾರಿಯಲ್ಲಿ,
ಜಪಾನು. ೧೯೭೧.

# ನೆಲದ ಸೆಳೆತ

ಆಕಾಶದ ಹಕ್ಕಿಗಳು
ಕಡಲ ದೋಣಿಗಳು
ದೂರ, ಬಹುದೂರ
ಎಷ್ಟೇ ನೆಲ ಮರೆತು ಮೆರೆಯಲಿ,
ಕೊನೆಗೆ ಅವು ಇಲ್ಲಿಗೇ ಬರಬೇಕು –
ಹಕ್ಕಿ ಮರವರಸಿ,
ದೋಣಿ ದಡವರಿಸಿ.

## ಸಮೂಹ-ಪ್ರಾರ್ಥನೆ

ಒಂದು ಗುಡ್ಡ.
ಗುಡ್ಡದ ಮೇಲೊಂದು ಬೌದ್ಧಮಂದಿರ.
ಗುಡ್ಡದ ನಾಲ್ಕೂ ಕಡೆಯ ಇಳಿಜಾರಲ್ಲಿ
ಎಡದಿಂದ ಬಲಕ್ಕೆ
ಮೇಲಿಂದ ಕೆಳಕ್ಕೆ
ಸಾಲುಸಾಲಾಗಿ ನೆಟ್ಟ ಪೈನ್ ಸಸಿಗಳು.
ಸದ್ದು!
ಬೌದ್ಧ ಭಿಕ್ಕುಗಳು
ಪ್ರಾರ್ಥನೆಗೆ ನಿಂತಿದ್ದಾರೆ.

ಹಕೋನೆ, ಜಪಾನು. ೧೯೭೧.

## ಕಾಮನ ಬಿಲ್ಲು

ಮಳೆ-ಬಿಸಿಲಿನ ಸಂಜೆ
ನಾಯ್‌ನರಿಗಳ ಮದುವೆ.
ಈ ಮದುಮಕ್ಕಳ
ಮೋದದ ಲೀಲೆಗೆ
ಕಾಮನಬಿಲ್ಲಿನ
ಉರುಟುಯ್ಯಾಲೆ.

# ಮಳೆಗಾಲದಲ್ಲಿ ನದಿ

ಮಳೆಗಾಲದಲ್ಲೀಗ
ಈ ನದಿ
ತುಂಬು ಬಸುರಿ.
ಎರಡೂ ದಂಡೆ ಬದಿ
ಹಸಿರು ಹೆರುತ್ತ
ಹರಿದಿದ್ದಾಳೆ.

# ಮಳೆಗಾಲದ ರಾತ್ರಿ

ಭೋರ್ಮಳೆಯ ರಾತ್ರಿ
ಒಮ್ಮೆ ಎಡದಿಂದ
ಒಮ್ಮೆ ಬಲದಿಂದ
ಕೋರೆದಾಡೆ ಮಿಂಚಿಸುತ
ಗುಡುಗು ಬೊಗಳುತ್ತಿದೆ
ಹುಚ್ಚು ನಾಯಿಗಳಂತೆ.

# ಮಳೆಗಾಲದ ಆಕಾಶ

ಮಳೆಗಾಲದ ಈ ರಾತ್ರಿ
ಆಕಾಶ
ಹುಚ್ಚಿ.
ಸಾಲದ್ದಕ್ಕೆ ಹೋಗಿ ಏರಿಸಿಬಂದಿದ್ದಾಳೆ
ಕಡಲ ಪಡಖಾನೆಯಲಿ
ನೊರೆಗಳ್ಳ.
ಕಾರ್ಮೋಡದ ಕರಿಗೂದಲ ಕೆದರಿ
ನಾಲ್ಕೂ ದಿಕ್ಕಿಗೆ ಹರಡಿ
ಫಳ್ಳನೆ ಮಿಂಚಿನ ಬಿರುಗಣ್ಣನು ಝಳಪಿಸುತ
ಅರಚಿದ್ದಾಳೆ, ಕಿರಚಿದ್ದಾಳೆ,
ಧೋ ಧೋ ಅತ್ತಿದ್ದಾಳೆ
ಮಳೆಗಾಲದ ಈ ರಾತ್ರಿ
    ಆಕಾಶ
    ಹುಚ್ಚಿ.

# ವರ್ಷಾಸಂಭ್ರಮ

ಶ್ರಾವಣ – ಭಾದ್ರ.
ಒಂದೇಸಮನೆ ಎರಡು ತಿಂಗಳು
ಒನಕೆಕುಟ್ಟಿನ ಮಳೆ.
ಹಿತ್ತಲು, ತೋಟ, ಗುಡ್ಡ, ಬಯಲು
ಎಲ್ಲೆಲ್ಲೂ ಹಸಿರೋ ಹಸಿರು.
ಅಷ್ಟೆಲ್ಲ ಕಣ್ಣು ತಣಿಸುವ ಹಸಿರನ್ನು ಕಂಡು
ಸುಣ್ಣಬಣ್ಣ ಕಾಣದೆ ಕಪ್ಪಿಟ್ಟ
ನನ್ನ ಮನೆಯ ಹೊರಗೋಡೆಗೆ
ಕಣ್‌ಕಿಸಿರೇನೊ!
ತಾನೂ ರಾತ್ರೋರಾತ್ರಿ ಮೈಮೇಲೆಲ್ಲ
ಹಸಿರು ಹಾವಸೆ ಬೆಳಸಿಕೊಂಡು
ಮೆರೆಯುತ್ತಿದೆ.

# ಮಾಸ್ಕೋದಲ್ಲಿ ಹಿಮ

ಶಿಶಿರದ ಶ್ವೇತಪಕ್ಷಿ
ಆಕಾಶವೃಕ್ಷವನ್ನೇರಿ ಕುಳಿತು
ತನ್ನ ವಿರಾಟ್‌ರೆಕ್ಕೆ ಹರಡಿ
ಸೂರ್ಯನನ್ನು ಮರೆಮಾಡಿದೆ.

ಶಿಶಿರದ ಶ್ವೇತಪಕ್ಷಿ
ದಿನವಿಡೀ ಪುಕ್ಕ ತರಿದುಕೊಳ್ಳುತ್ತದೆ.
ಅದೊ, ಎಲ್ಲೆಲ್ಲೂ ಗುಡ್ಡೆ ಗುಡ್ಡೆ ಹಿಮ,
ಕಳೆದುಹೋದ ಬೆಳಕಿನ ಭಾಸ!

ಮಾಸ್ಕೋ, ೧೯೮೮.

# ಹಕ್ಕಿಪಾಠ

ಹಗಲೆಲ್ಲಾ
ಕೆಳಗೆ
ಹಸಿರುಗಣ್ಣಿನ
ಬೆಕ್ಕುಗಳ ಕಾಟ.

ರಾತ್ರಿಯಿಡೀ
ಮೇಲೆ
ಹಳದಿಗಣ್ಣಿನ
ಗೂಗೆ ನೋಟ.

ನಡುವೆ ಮರದ ಮೂಲೆಯಲ್ಲೆಲ್ಲೊ
ನಾಲ್ಕು ಎಳೆಕಡ್ಡಿ ಗೂಡಲ್ಲಿ
ನಿನ್ನೆಮೊನ್ನೆಯ
ಬೆಳ್ಳಕ್ಕಿ ಮರಿಗಳು

ಕಿಚಕಿಚಗುಟ್ಟುತ್ತ
ತಾಯಿಂದ
ಆಕಾಶದುದ್ದಗಲ
ಅಳೆಯುವುದ ಕಲಿಯುತ್ತಿವೆ.

## ರೂಪಾಂತರ

ಹಗಲು ಮರದಲ್ಲಿ
ಕಿಚಕಿಚಗುಟ್ಟುವ
ಹಾಡುಹಕ್ಕಿಗಳು.

ಅವೇ ರಾತ್ರಿ ಆಕಾಶದಲ್ಲಿ
ಮಿಣಮಿಣಗುಟ್ಟುವ
ಬೆಳ್ಳಿಚಿಕ್ಕೆಗಳು.

## ಬರಿದೋ ಬರಿದು

ಹಕ್ಕಿಗಳು
ಬಿಟ್ಟುಹೋದೊಂದು ಮರ
ಬರಿದೋ ಬರಿದು.

ಮರ
ಉರುಳಿಬಿದ್ದೊಂದು ಸ್ಥಳ
ಬರಿದೋ ಬರಿದು.

# ಕೊನೆಯುಳಿಕೆ

ಇಂದು:
ಈ ಹಕ್ಕಿಗೂಡಲ್ಲಿ
ಮರಿಗಳಾಡಿವೆಯೆಂಬುದಕ್ಕೆ
ಈ ನಾಲ್ಕು ರೆಕ್ಕೆಪುಕ್ಕ.

ನಾಳೆ:
ಇಲ್ಲೊಂದು ಬೆಕ್ಕು
ಹಾದು ಹೋಗಿತ್ತೆಂಬುದಕ್ಕೆ
ಈ ನಾಲ್ಕು ರೆಕ್ಕೆಪುಕ್ಕ –
    ಬದುಕು, ಸಾವಿನ ಸಾಕ್ಷಿ.

## ಆಕಾಶಯಾನ

ಕತ್ತಲ ರಾತ್ರಿ.
ಹಿತ್ತಲಲ್ಲಿ
ಕತ್ತೆತ್ತಿ ನೋಡಿದರೆ
ಬಿರುಗಾಳಿಯ ಬೀಸಿನಲ್ಲಿ
ಈ ಒಂಟಿ ತೆಂಗಿನಮರವೊಂದು
ದೈತ್ಯಪಕ್ಷಿ.
ನೆಲಕ್ಕೆ ತನ್ನ ಒಕ್ಕಾಲನ್ನೂರಿ
ಸುತ್ತ ನಾಲ್ಕೂ ಕಡೆಗೆ ರೆಕ್ಕೆ ಬೀಸಿ
        ಹೊರಟಿದೆ
        ಆಕಾಶಯಾನ.

## ಕೊನೆಯ ನೃತ್ಯ

ಶರದ್ದಿನಗಳಲಿ
ಗಾಳಿಯಲಿ ಗಿರ್ರನೆ ತಿರುಗಿ
ದುಂಡುದುಂಡಾಗಿ ಸುತ್ತುತ್ತ
ಮರದ ಮೇಲಿಂದ
ನೆಲಕ್ಕಿಳಿದು ಬೀಳುವ
ಹಳದಿ ಹಣ್ಣೆಲೆ:
        ಸಾವಿನಾಸ್ಥಾನದಲ್ಲಿ
        ಬದುಕು ನಡೆಸುವ
        ಕೊನೆಯ ನೃತ್ಯಲೀಲೆ.

## ಈ ಕಾಲ – ೧

ಇಲ್ಲಿ ಕತ್ತಲೋ ಕತ್ತಲು.
ಎಡಗೈ, ಬಲಗೈ
ಒಂದಿನ್ನೊಂದನ್ನು ಕಾಣವು.
ಎಷ್ಟಾದರೂ ಇದು ಕತ್ತಲ ಕಾಲ.

ಒಳ್ಳೆಯದೇ ಆಯಿತು.
ಕೊಂಚ ಬೆಳಕಿದ್ದಿದ್ದರೂ
ಒಂದಿನ್ನೊಂದನ್ನು ತಿರುಚಿಹಾಕುತ್ತಿತ್ತು.
ಎಷ್ಟಾದರೂ ಇದು ಕತ್ತಲ ಕಾಲ.

## ಈ ಕಾಲ – ೨

ಇಲ್ಲಿ ಎಲ್ಲೆಲ್ಲೂ ಕೈಗಳೋ ಕೈಗಳು,
ಜೇಬುಗಳೋ ಜೇಬುಗಳು.
ಇವನ ಕೈ ಅವನ ಜೇಬಲ್ಲಿ,
ಅವನ ಕೈ ಮತ್ತೊಬ್ಬನದರಲ್ಲಿ.
ಜೇಬು ಕಾಣದ ಕೆಲವೇ ಕೈಗಳು
ಭಿಕ್ಷೆ ಬೇಡುತ್ತಿವೆ,
ಇಲ್ಲವೇ ಚೂರಿಗೆ ತಡಕುತ್ತಿವೆ.

## ಬದುಕು

ಹುಟ್ಟಿನ ಆಯುಷ್ಯ
        ಒಂಬತ್ತು ತಿಂಗಳು.

ಸಾವಿನ ಆಯುಷ್ಯ
        ಒಂದು ಕ್ಷಣ.

ಬದುಕಿನ ಆಯುಷ್ಯ
        ಪೂರಾ ಒಂದು ಜೀವಮಾನ.

ಎಂತಲೇ ಹುಟ್ಟುಸಾವುಗಳಿಗಿಂತ
        ಬದುಕು
        ದೊಡ್ಡದು.

# ಭೂತ

ಈ ಬದುಕೊಂದು ವಿಚಿತ್ರ ಭೂತ.
ಕೊಡು,
'ಕೋ' ಎಂದು
ನೂರುಪಟ್ಟು ವಾಪಸು ಕೊಡುತ್ತದೆ.
ಬೇಡು,
ಬರಿಗೈ ತೋರಿಸಿ ಮಾಯವಾಗುತ್ತದೆ.

## ‘ಜೈ ಮಹಾವೀರ’

‘ಕೊಲ್’
ಅಂದದ್ದು
ಎಂಥ ವೀರವೊ ಏನೊ,
‘ಕೊಲ್ಲದೆಯೆ ಗೆಲ್’
ಅಂದದ್ದಂತೂ
ಮಹಾವೀರ –
        ‘ಜೈ ಮಹಾವೀರ’.

# ಆತ್ಮನೇಪದ

ನಾನು, ನನ್ನದು, ನಾನು ಮಾಡಿದ್ದು
ಎಂದು ಜಂಬ ಕೊಚ್ಚಿಕೊಳ್ಳುವ ನಾವೆಲ್ಲರೂ
ಹೊತ್ತು ಓಡಾಡುವುದು
ನಮಗೆ ಯಾರೋ ಕೊಟ್ಟ
ನಾವು ಕಾಣದ
ಮತ್ತಾರದೋ ಹೆಸರನ್ನ.

# ಕೈನ್ – ಏಬಲ್

ಒಂದೇ ಬೀಜ
ಒಂದೇ ಕೋಶ.

ಕೈಯೆತ್ತಿದವನು
ಕೈನ್ ಆದ.

ತಲೆ ಕೊಟ್ಟವನು
ಏಬಲ್ ಆದ.

ಇಬ್ಬರೂ ಸೇರಿ
ಬೈಬಲ್ ಆದರು.

## ಕನಸುಗಳು

ಸಮುದ್ರದ ಹೊಟ್ಟೆಯಲ್ಲಿ ಹುಟ್ಟಿ
ಗುಡುಗು-ಸಿಡಿಲಿನ ಲಾಲಿ ಆಲಿಸುತ
ಆಕಾಶದ ತೊಟ್ಟಿಲಲ್ಲಿ ಬೆಳೆದು

ಪ್ರಾಯ ಬಂದಂತೆ
ಗಿಡಮರಗಳ ಹಸಿರು ಸುಪ್ಪತ್ತಿಗೆಯ ಮೇಲೆ
ಹೂ-ಹಣ್ಣುಗಳೊಡನೆ ರಮಿಸುತ್ತ ಕಳೆದು

ಕೊನೆಗಾಲದಲ್ಲೀಗ
ಬಚ್ಚಲ ಕೊಚ್ಚೆಯಲ್ಲಿ
ತೊಟ ತೊಟ ತೊಟ
ಬಿದ್ದು ಸಾಯುತ್ತಿದೆ
ಮ
ಳೆ
ಹ
ನಿ
ನಮ್ಮ ಎಷ್ಟೋ ಕನಸುಗಳಂತೆ.

# ಕಟ್ಟಿದ ಮನೆ

ಕಾಸಿಗೆ ಕಾಸು ಕೂಡಿಸಿ
ಮೇಲೊಂದಿಷ್ಟು ಸಾಲವೆತ್ತಿ
ಬೆಚ್ಚನೆಯ ಮನೆ ಕಟ್ಟಿ
ಬೀದಿಯ ಗುಬ್ಬಚ್ಚಿ ಪಾರಿವಾಳಗಳಿಗೆ
ಬಾಡಿಗೆದಾರನಾಗಬೇಕಾಗಿ ಬಂದದ್ದು –
ನಂಬಿದ ಈ ಇಹಕ್ಕಾಗಲೆಂದು ಮಾಡಿದ
ಸಂಪಾದನೆ
ನಂಬದ ಆ ಪರಕ್ಕೂ ಸಂದ
ಸಾಧನೆ.

## ಸ್ಮೃತಿ ಚಿಹ್ನೆ

ಹತ್ತು ವರ್ಷಗಳ ಹಿಂದೆ
ಅಂತಿಮ ವಿದಾಯ ಹೇಳಿ
ಆ ಪರನಾಡನ್ನು ಬಿಟ್ಟುಕೊಟ್ಟು ಬಂದಿದ್ದೆ.
ಮೊನ್ನೆ ನನ್ನ ಟ್ರಾವಲ್ ಬ್ಯಾಗಿನಲ್ಲಿ
ಏನನ್ನೋ ಹುಡುಕುತ್ತಿದ್ದಾಗ
ಅದರ ತಳದಲ್ಲಿ ಸಿಗಬೇಕೆ? –
    ಅಲ್ಲಿನ ಸಮುದ್ರ ದಂಡೆಯ
    ಮೂರು ಕಣ ಮರಳು!

# ನಿರುತ್ತರ – ೧

ನಡುರಾತ್ರಿ
ನಿದ್ರೆಯಲ್ಲಿದ್ದಾಗ
ಬಂದು ಹೋದ
ಎಲೆ ಸವಿಗನಸೆ,
        ಕತ್ತಲಲ್ಲಿ
        ನಿನಗೆ ಕದ ತೆರೆದವರಾರೆ ?

---

ಇದು ಒಂದು ಜಪಾನೀ ಹೈಕುವಿಗೆ ಪ್ರತಿಸ್ಪಂದನ.

# ಅವರವರ ಭಾಗ್ಯ!

ಕನಸಿಗೆ
ನಮಗಿರುವಂತೆಯೇ
ಎರಡು ಕಣ್ಣು, ಎರಡು ಕೈ –
ಒಂದು ಯಕ್ಷಿಯದು,
ಇನ್ನೊಂದು ಭೂತದ್ದು.

ಇವತ್ತು ರಾತ್ರಿ ನಿದ್ರೆಯಲ್ಲಿ
ಅದು ಯಾರನ್ನು ಯಾವ ಕಣ್ಣಿಂದ ನೋಡಿ
ಯಾವ ಕೈಯಿಂದ ಯಾರ ತಲೆ ಸವರುವುದೊ ?
ಅದರ ಮರ್ಜಿ!
ಅವರವರ ಭಾಗ್ಯ!!

# ವ್ಯಥೆ

ಗರ್ಭಗುಡಿಯ
ಕಲ್ಲುದೇವರಿಗೆ
ಒಂದೇ ವ್ಯಥೆ –
ಕೊನೆಗೂ ತನ್ನನ್ನು ಬೆಳಗಿಸಲು
ಮಣ್ಣ ಹಣತೆಯೇ ಬೇಕಾಯಿತೆ ?

## ಬಯಕೆ – ಭಯ

ಇಲ್ಲೆಲ್ಲೋ ಒಂದು ಕಲ್ಲು
ತನ್ನೊಳಗಿನ ಚೆಲುವು
ಶಿಲ್ಪದಲ್ಲಿ ಮೆರೆಯಲೆಂದು
ಜಕ್ಕಣನ ಕೈಯುಳಿಗೆ ಕಾಯುತ್ತಿದೆ.

ಇನ್ನೆಲ್ಲೋ ಒಂದು ಕಲ್ಲು
ಹಂತಕನ ಕೈಯ
ಆಯುಧವಾಗಲು ಹೆದರಿ
ಮಣ್ಣಲ್ಲಿ ಮೈಮರಸಿ ಕೂತಿದೆ.

# ನಿರುತ್ತರ – ೨

ಶಿಲ್ಪಿ ಜಕ್ಕಣ
ಕಲ್ಲು ಕಡೆಯುತ್ತಿದ್ದ.
ಬೆಕ್ಕಸಗಣ್ಣಿಂದ ಅದನ್ನು ನೋಡುತ್ತ ನಿಂತಿದ್ದ
ಪುಟ್ಟ ಮಗಳು ಗೌರಿ ಕೇಳಿದಳು –
"ಈ ಬಂಡೆಯಲ್ಲೊಂದು
ಚೆಲುವೆ ಹುಡುಗಿ
ಕೊಳಲೂದುತ್ತ ಕೂತಿದ್ದದ್ದು
ನಿನಗೆ ಹೇಗೆ ಗೊತ್ತಿತ್ತೊ, ಅಪ್ಪಯ್ಯ?"

# ಚರ್ಚಿನಲ್ಲಿ ನೋಡಿದ್ದು

ಶೋಕತಪ್ತ ಮಗ.
ಅವನ ಅಂಗಿತೋಳಿಗೆ ಹಚ್ಚಿದ
ಕಪ್ಪು ಪಟ್ಟಿ
ಗಾಳಿಗೆ ಪಟಪಟ ರೆಕ್ಕೆ ಬಡಿಯುತ್ತಿದೆ –
ಸತ್ತ ಅಪ್ಪನ ಆತ್ಮ
ಚಿಟ್ಟೆಯಾಗಿ ಬಂದು.

## ಹೈಕು — ೧

ಇಲ್ಲಿ ಬೇಸಿಗೆಯಲ್ಲಿ ಕೋಟಿ ತುಟಿಗಳಾಗಿ
ಬಿರಿದುಕೊಳ್ಳುತ್ತದೆ, ನೆಲ —
ನಾಲ್ಕು ಹನಿ ನೀರಿಗಾಗಿ.

## ಹೈಕು – ೨

ನದಿಯ ವೀಣೆ ದಂಡಿಗೆ ಮೇಲೆ
ಗಾಳಿ ಬೆರಳಾಟ –
ಅಲೆಯ ಅಶ್ರುತ ಗಾನ.

## ಹೈಕು – ೩: ರತಿಕ್ರೀಡೆ

ನದಿಯ ಸೆರಗಿನ ಮೇಲೆ
ಗಾಳಿ-ಬೆರಳಾಟ –
ಎದ್ದಿವೆ ಬಯಕೆ-ಅಲೆಗಳು.

## ಹೈಕು — ೪

ಪಿಶಾಚಿ ಮರ.
ರಾತ್ರಿ ಕತ್ತಲಿನಲ್ಲಿ
ಅದರ ನೆರಳೇ ಅದಕ್ಕೆ ಸಂಗಾತಿ.

## ಹೈಕು – ೫

ಹಗಲ ಮೆಚ್ಚಿನ ಮರ
ರಾತ್ರಿ ಕತ್ತಲಿನಲ್ಲಿ
ಭೂತವಾದಂತೆ –
 ಹರೆಯದ ಕೆಲವು ನೆನಪುಗಳು.

## ಹೈಕು — ೬

ಎಲೆಮರೆಯ ಕಾಯಿ.
ಲೋಕದ ಕಾಗೆ
ಅದನ್ನೂ ಕುಕ್ಕದೆ ಬಿಡಲಿಲ್ಲ.

## ಹೈಕು – ೭

ಮಳೆಗಾಲದ ರಾತ್ರಿ ಕಪ್ಪೆಗಳ ವಟವಟ –
ನನ್ನ ಸೋರುವ ಸೂರನ್ನು ಕಂಡು
ಅವೂ ನಗುತ್ತಿರುವಂತೆ.

## ಹೈಕು – ೮

ನೀನು ಇಲ್ಲಿಲ್ಲದಾಗಲೂ
ನೀನು ಸದಾ ನನ್ನೊಡನಿದ್ದಿ –
ನನ್ನ ಏಕಾಕಿತನವಾಗಿ!

"ಹೋಲೆ... ಹೋಲೆ
ನೋಡೆಲೆ ಬಾಲೆ
ನೆತ್ತಿಯ ಮೇಲೆ
ಬೆಳ್ಳಕ್ಕಿ ಮಾಲೆ."



ಐವತ್ತನಾಲ್ಕು ಕಿರುಗವಿತೆಗಳು